# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್ ಎನ್ ಎಸ್ . 19

3ನೇ ವರ್ಷ 42ನೇ ಸಂಚಿಕೆ ಕೊಪ್ಪ 21-7-1985 ಭಾನುವಾರ ಬೆಲೆ 40 ಪೈಸೆ


## ಕೆರೆಕಟ್ಟೆ ರಸ್ತೆಗೆ ಆಕ್ಷೇಪ ನಿವಾರಣೆ

ಶೃಂಗೇರಿ: ಇಲ್ಲಿಂದ ಕುದುರೆಮುಖ–ಮಂಗಳೂರು ರಸ್ತೆಗೆ ನೇರ ಸಂಪರ್ಕ ಕಲ್ಪಿಸುವ ಲೋಕೋಪಯೋಗಿ ಇಲಾಖೆಯ ರಸ್ತೆ ಬಗ್ಗೆ ಪರಿಸರ ತಜ್ಞರು ಎತ್ತಿದ್ದ ಆಕ್ಷೇಪಣೆ ಈಗ ನಿವಾರಣೆಯಾಗಿದ್ದು, ರಸ್ತೆಯ ಕಾಮಗಾರಿ ಮುಂದುವರಿಕೆಗೆ ಸರ್ಕಾರ ಅನುಮೋದನೆ ನೀಡಿದೆ.

### ಗಡುವು ಮೀರಿದ ಟೆಂಡರ್

ಈ ವಿವಾದದ ಕಾರಣ ರಸ್ತೆ ಕಾಮಗಾರಿ ಕೈಗೊಳ್ಳಲು ಟೆಂಡರ್‌ದಾರರಿಗೆ ಕೆಲಸದ ಆಜ್ಞೆ ನೀಡುವಲ್ಲಿ 2 ತಿಂಗಳಿಗೂ ಹೆಚ್ಚು ವಿಳಂಬವಾಗಿ ಟೆಂಡರ್‌ಗಳ ಗಡುವು ಮೀರಿದ್ದು, 2 ನೇ 'ಸೆಕ್ಟರ್'ನ ಕಂಟ್ರಾಕ್ಟರು ಮಾತ್ರ ಅದೇ ಟೆಂಡರ್ ಅನ್ವಯ ಕೆಲಸ ಮಾಡಲು ಒಪ್ಪಿಗೆ ನೀಡಿದ್ದಾರೆ. 1 ನೇ ಸೆಕ್ಟರ್‌ನವರು ಇದಕ್ಕೆ ನಿರಾಕರಿಸಿದ್ದು, ಇಲಾಖಾ ನಿಯಮಗಳನ್ವಯ ಈ ಭಾಗಕ್ಕೆ ಬೇರೆ ಕಂಟ್ರಾಕ್ಟರನ್ನು ನಿಯೋಜಿಸುವ ಬಗ್ಗೆ ಕ್ರಮ ಕೈಗೊಳ್ಳಲಾಗಿದೆ. 2 ನೇ ಸೆಕ್ಟರಿನ ಕೆಲಸದ ಆಜ್ಞೆ ಜು. 22 ರೊಳಗೆ ಜಾರಿಯಾಗಬೇಕಾಗಿದೆ. 1 ನೇ ಸೆಕ್ಟರಿನದೂ ಶೀಘ್ರದಲ್ಲೇ ಆಗುವ ನಿರೀಕ್ಷೆ ಇದೆ.

(ಶೃಂಗೇರಿ–'ದ.ಕ. ಗಡಿ'ವರೆಗಿನ 29. ಕಿ.ಮೀ. ಮಾರ್ಗದಲ್ಲಿ 11.85 ಕಿ.ಮೀ. ವರೆಗೆ ಈಗಾಗಲೇ ಟಾರ್ ಆಗಿದ್ದು, ಅಲ್ಲಿಂದ 23 ನೇ ಕಿ.ಮೀ.ವರೆಗೆ 1ನೇಸೆಕ್ಟರ್ ಎಂದೂ ಅಲ್ಲಿಂದಮುಂದಿನ ಭಾಗವನ್ನು 2ನೇ ಸೆಕ್ಟರ್ ಎಂತಲೂ ವಿಭಾಗಿಸಲಾಗಿದೆ. ಇವುಗಳ ವೆಚ್ಚ ಕ್ರಮವಾಗಿ 13 ಲಕ್ಷರೂ. ಮತ್ತು 12 ಲಕ್ಷರೂ.)

# ಕೈಕೊಟ್ಟ ಮಳೆ; ಆತಂಕದಲ್ಲಿ ರೈತರು

**ಕೊಪ್ಪ: ಈ ಬಾರಿ ಮಲೆನಾಡಿನಲ್ಲಿ ಮಳೆಗಾಲ ಸಕಾಲದಲ್ಲಿ ಆರಂಭವಾದರೂ ಬೇಸಾಯದ ಕೆಲಸ ಒಳ್ಳೆ ಬಿರುಸಿನಲ್ಲಿರುವಾಗ ಮಳೆ ಕೈಕೊಟ್ಟಿದ್ದು, ಭತ್ತದ ಬೆಳೆಗಾರರು ತೀವ್ರ ಸಂಕಷ್ಟಕ್ಕೆ ಸಿಕ್ಕುವ ಭಯ ಆವರಿಸಿದೆ.**

ಜೂನ್ ತಿಂಗಳಲ್ಲಿ ತಕ್ಕಮಟ್ಟಿಗೆ ಮಳೆಯಾಗಿದೆಯಾದರೂ ಇಡೀ ಬೇಸಿಗೆಯಲ್ಲಿ ಕೇವಲ 2 ಅಂಗುಲ ಮಳೆಯಾಗಿದ್ದರಿಂದ ಎಲ್ಲೂ ಒರತೆ ನೀರು ಹುಟ್ಟಲು ಸಾಕಾಗಿಲ್ಲ. ಜೂನ್‌ನಿಂದ ಈವರೆಗೆ (ಜು.19) ಕೇವಲ 44 ಅಂಗುಲ ಮಳೆಯಾಗಿದೆ.

ಕಳೆದ ವರ್ಷ ಬೇಸಿಗೆಯಲ್ಲಿ 18.5 ಅಂಗುಲ ಮಳೆಯಾಗಿದ್ದಲ್ಲದೆ, ಈ ಅವಧಿಯೊಳಗೆ 59 ಅಂಗುಲ ಮಳೆಯಾಗಿತ್ತು.

1982 ರ ಜುಲೈ 31 ರಿಂದ ಆಗಸ್ಟ 3 ರ ನಡುವಿನ 4 ದಿನದಲ್ಲಿ 19 ಅಂಗುಲ ಮಳೆಯಾಗಿ ಎಲ್ಲೆಡೆ ನೆರೆ ಹಾವಳಿಯಿಂದ ವಿಪರೀತ ಆಸ್ತಿ–ಪಾಸ್ತಿ ನಷ್ಟವಾದಂತೆ ಈಗ ಪುನಃ ಆಗುವ ಭಯವೂ ಕಾಡತೊಡಗಿದೆ.

## ಹಿಂಬರಹಕ್ಕೆ 'ಫೀಸು'!?

ಕೊಪ್ಪ: ತಹಸೀಲ್ದಾರರ ಕಚೇರಿಯಲ್ಲಿ ಅರ್ಜಿ ಕೊಟ್ಟಿದ್ದಕ್ಕೆ ಹಿಂಬರಹ ಕೊಡಲೂ 'ಫೀಸು' ಉಂಟೋ?

ಆ ಹಿಂಬರಹದಿಂದ ನಿಮಗೆ ಬ್ಯಾಂಕು ಮುಂತಾದೆಡೆ ಕೆಲಸ ಆಗುತ್ತಾದರೆ ಉಂಟಂತೆ.

ಹೌದಾ, ಸುಳ್ಳಾ?

ಏಲಕ್ಕಿ ಸಿ.ಆರ್.ಸಿ.ಗೆ ಅರ್ಜಿ ಸಲ್ಲಿಸಿದ್ದರೆ ಆದರೆ ಹಿಂಬರಹದ ಆಧಾರದ ಮೇಲೆ ಏಲಕ್ಕಿ ಮಂಡಳಿಯಲ್ಲಿ ರಿಕಾರ್ಡ್ ಸಿದ್ಧಪಡಿಸುತ್ತಾರೆ. ಮೊನ್ನೆ 15ನೇ ತಾರೀಕು ಕಲ್ಲುಗುಡ್ಡೆ ಗ್ರಾಮದ ಬಡ ರೈತರೊಬ್ಬರಿಗೆ ಇಂಥ ಹಿಂಬರಹಕ್ಕೆ ಸಹಿ ಹಾಕಲು ಶಿರಸ್ತೆದಾರ್ ರಂಗಪ್ಪ 5 ರೂ. 'ಫೀಸು' ವಸೂಲಿ ಮಾಡಿದರಂತೆ. ತಹಸಿಲ್ದಾರರಲ್ಲಿ ದೂರಿದಾಗ ಅವರು ಅಲಾಯದಾ ಕರೆಸಿ ಕೇಳಿದ್ದಕ್ಕೆ 'ಸುಳ್ಳು' ಎಂದರಂತೆ ರಂಗಪ್ಪ. 'ಮುಂಜಾವು'ಗೂ ಹಾಗೇ ಹೇಳಿದರು. ತಹಸೀಲ್ದಾರರು ಆ ರೈತರಿಂದ ಲಿಖಿತ ದೂರನ್ನೇ ಪಡೆದು ವಿಚಾರಣೆ ಏರ್ಪಡಿಸಬಹುದಿತ್ತಲ್ಲ?

## ಅಂಗನವಾಡಿ ಕಾರ್ಯಕರ್ತೆಯ 'ವಿಧಾನಸೌಧ ಚಲೋ'

ಚಿಕ್ಕಮಗಳೂರು: ಅಂಗನವಾಡಿ ಯೋಜನೆಯ ಕಾರ್ಯಕರ್ತೆಯರು ಮತ್ತು ಸಹಾಯಕಿಯರು ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆ ಸರ್ಕಾರದ ಗಮನ ಸೆಳೆಯಲು ಜು. 22 ರಂದು ಅಂಗನವಾಡಿ ಕಾರ್ಯಕರ್ತೆಯರ/ಸಹಾಯಕಿಯರ 'ವಿಧಾನ ಸೌಧ ಚಲೋ' ಕಾರ್ಯಕ್ರಮಕ್ಕೆ ಎ.ಐ.ಟಿ.ಯು.ಸಿ. ರಾಜ್ಯಮಂಡಳಿ ಕರೆ ಕೊಟ್ಟಿದ್ದು ಇದರಲ್ಲಿ ಜಿಲ್ಲೆಯ 500 ಮಂದಿ ಪಾಲ್ಗೊಳ್ಳುತ್ತಾರೆಂದು ಅವರ ಜಿಲ್ಲಾ ಸಂಘದ ಅಧ್ಯಕ್ಷೆ ಶ್ರೀಮತಿ ರಾಧಾ ಸುಂದರೇಶ್ ತಿಳಿಸಿದ್ದಾರೆ.

## ಎಲ್ಲೆಲ್ಲೂ ಶಿಕ್ಷಕರ ಕೊರತೆ

ಕೊಪ್ಪ: ಹಳ್ಳಿಗಾಡಿನ ಶಾಲೆಗಳಲ್ಲಿ, ಮುಖ್ಯವಾಗಿ ಪ್ರಾಥಮಿಕ, ಮಾಧ್ಯಮಿಕ ಶಾಲೆಗಳಲ್ಲಿ ಶಿಕ್ಷಕರ ಕೊರತೆ ಮತ್ತೊಮ್ಮೆ ತೀವ್ರವಾಗಿ ತಲೆದೋರಿದೆ.

ಯಾವ ಶಾಲೆ ನೋಡಿದರೂ ಒಬ್ಬರು ಅಥವಾ ಇಬ್ಬರು ಅಧ್ಯಾಪಕರಿದ್ದು, ಅವರು ನಾಲ್ಕು ಅಥವಾ ಏಳೂ ತರಗತಿಗಳನ್ನು ನೋಡಿಕೊಳ್ಳಬೇಕಾಗಿದೆ. ಅಷ್ಟೇ ಸಾಲದೆಂಬಂತೆ ದಿನನಿತ್ಯದ ನಡವಳಿಕೆಯ ಜೊತೆಗೆ ಪಠ್ಯಪುಸ್ತಕದ ಉಸ್ತುವಾರಿ ಮುಂತಾದುವನ್ನೂ ವಹಿಸಬೇಕಾಗಿದೆ.

ಕೊಪ್ಪ ತಾಲ್ಲೂಕೊಂದರಲ್ಲೇ 284 ಶಿಕ್ಷಕರ ಹುದ್ದೆಗಳ ಪೈಕಿ 58 ಹುದ್ದೆಗಳು (1 ದೈಹಿಕ, 1 ಕ್ರಾಫ್ಟ್, 3 ಹಿಂದಿ ಸೇರಿ) ಖಾಲಿ ಬಿದ್ದಿವೆ. 11 ಪದವೀಧರ ಉಪಾಧ್ಯಾಯರ ಪೈಕಿ ಮೂವರು ಮಾತ್ರ ಇದ್ದಾರೆ.

## ಕೊಪ್ಪಕ್ಕೆ ಹೊಸ ಸರ್ಕಲ್ ಇನ್‌ಸ್ಪೆಕ್ಟರ್ : ಕ್ಷೇತ್ರದ ಪೋಲೀಸ್ ವ್ಯವಸ್ಥೆ ಸುಧಾರಣೆ ನಿರೀಕ್ಷೆ

ಪೋಲೀಸ್ ವ್ಯವಸ್ಥೆ ಹದ್ದು ಮೀರಿದರೆ ಶಾಂತಿ ಭಂಗವಾಗುತ್ತದೆ. ಇಲ್ಲದ ಸಮಸ್ಯೆಗಳು ಹುಟ್ಟಿಕೊಂಡು ಸಾರ್ವಜನಿಕರ ನೆಮ್ಮದಿ ಕೆಡುತ್ತದೆ.

ಅದೇ ಪೋಲೀಸ್ ವ್ಯವಸ್ಥೆ ಬಿಗಿ ತಪ್ಪಿದಾಗಲಂತೂ ಈ ದುಷ್ಪರಿಣಾಮಗಳು ಇನ್ನೂ ತೀವ್ರವಾಗಿ ಕಾಡುತ್ತವೆ. ಸಣ್ಣ ಪುಟ್ಟ ಪುಂಡರೂ ಗೂಂಡಾಗಳಂತೆ ಮೆರೆಯುತ್ತಾರೆ; ಜೂಜು, ಮಟ್ಕಾ, ಹುಡುಗಿಯರ ಸಾಗಾಣಿಕೆ, ಕಳ್ಳಸಾಗಾಣಿಕೆಗಳಂಥವು ರಾಜಾರೋಷವಾಗುತ್ತವೆ; ಬಡಬಗ್ಗರ ಮೇಲೆ ಬಲಿಷ್ಠರ ದೌರ್ಜನ್ಯ ಎಲ್ಲೆ ಮೀರುತ್ತದೆ; ದುಡ್ಡು, ಪ್ರಭಾವಗಳು ಎಲ್ಲ ದೌರ್ಜನ್ಯವನ್ನು ಮುಚ್ಚಿಹಾಕಿ ನ್ಯಾಯವಾಗಿ ಬಾಳುವುದೇ ದುಸ್ತರವಾಗುತ್ತದೆ.

ಕೊಪ್ಪ ಪೋಲೀಸ್ ಸರ್ಕಲ್ (ಶೃಂಗೇರಿ ವಿಧಾನ ಸಭಾ ಕ್ಷೇತ್ರ) ವ್ಯಾಪ್ತಿಯ ಈ ಪ್ರಾಂತ್ಯದಲ್ಲೂ ಈಚಿನ 2-3 ವರ್ಷಗಳಲ್ಲಿ ಇದೇ ಪರಿಸ್ಥಿತಿ ಉಂಟಾಗಿದೆ. ಕಳೆದೊಂದು ವರ್ಷದಿಂದ ನ.ರಾ. ಪುರದ ಸಬ್ ಇನ್‌ಸ್ಪೆಕ್ಟರ್ ಬಿ. ಜೆ. ಭಂಡಾರಿ ತಕ್ಕಮಟ್ಟಿಗೆ ದಿಟ್ಟ ನಿಷ್ಠರಾಗಿದ್ದಾರೆಂಬ ಮಾತು ಕೇಳಿಬರುತ್ತದಾದರೂ ಉಳಿದೆರಡು ತಾ|| ಗಳ ಸ್ಥಿತಿ ಶೋಚನೀಯವಾಗಿದೆಯೆಂದೇ ಹೇಳಬಹುದು.

ಅದಕ್ಕಿಂತ ಮೊದಲು ಈ ಮೂರೂ ತಾ|| ಗಳು ಒಬ್ಬೊಬ್ಬ ಅತ್ಯುತ್ತಮ ಸಬ್‌ಇನ್‌ಸ್ಪೆಕ್ಟರುಗಳನ್ನು ಕಂಡಿವೆ. ಲಕ್ಷ್ಮಣ್. ಪುಟ್ಟಸ್ವಾಮಿ ಗೌಡ ಮತ್ತು ರಮಾನಂದ ರೈ— ಇವರಿಗೆ ಕಾನೂನಿನ ಪ್ರಜ್ಞೆಯ ಜೊತೆಗೆ ನ್ಯಾಯದ ಒಳಗಣ್ಣೂ ಇತ್ತು. ಬಡಬಗ್ಗರು, ಅನ್ಯಾಯಕ್ಕೊಳಗಾದ ಅಶಕ್ತರು ಇವರ ಹತ್ತಿರ ನಿರ್ಭೀತಿಯಿಂದ ನ್ಯಾಯ ಕೇಳಲು ಬರುತ್ತಿದ್ದರೆ, ಗೂಂಡಾಗಳು, ಕಪ್ಪು ವ್ಯವಹಾರಗಳವರು, ಪೋಕರಿಗಳು ಥರಥರ ನಡುಗುತ್ತಿದ್ದರು. ಇವರು ಕರ್ತವ್ಯವನ್ನು ಬರೀ ಸಂಬಳಕ್ಕಾಗಿ ಅಲ್ಲ, ಒಂದು ಸಾಮಾಜಿಕ ಕಳಕಳಿಯಿಂದ ನಿರ್ವಹಿಸುತ್ತಿದ್ದರು.

ಕೊಪ್ಪದ ಸಬ್ ಇನ್‌ಸ್ಪೆಕ್ಟರಾಗಿರುವ ಶಶಿಕುಮಾರ್ ಆಗಲಿ, ಶೃಂಗೇರಿಯ ವೆರ್ಣೇಕರ್ ಆಗಲಿ, ಬಂದ ಹೊಸತರಲ್ಲಿ ಬಹಳ ಭರವಸೆ ಹುಟ್ಟಿಸಿದ್ದವರು. ಆದರೆ ಬರಬರುತ್ತ ವೆರ್ಣೇಕರ್ ಎಲ್ಲಾ ತರದ ಕಪ್ಪು ಖ್ಯಾತಿಗೂ ಈಡಾದರೆ, ಶಶಿಕುಮಾರ್ ಆ ಮಟ್ಟಕ್ಕೆ ಇಳಿದ ದೂರುಗಳಿಲ್ಲವಾದರೂ ನಿಷ್ಕ್ರಿಯತೆಯ ಪಾತಾಳ ಹೊಕ್ಕಿದ್ದನ್ನು ಎಲ್ಲರೂ ಹೇಳುತ್ತಾರೆ.

ಪೋಲೀಸ್ ವ್ಯವಸ್ಥೆ ಬಿಗಿಯಾಗುವುದೆಂದರೆ ದಾಕ್ಷಿಣ್ಯ ಕಣ್ಣು ಮುಚ್ಚಿ ದೊಣ್ಣೆ ಬೀಸುವುದೆಂದಲ್ಲ. ಮೇಲೆ ಹೇಳಿದಂತೆ ಕಾನೂನಿನ ತಕ್ಕಡಿಯ ಜೊತೆಗೆ ನ್ಯಾಯದ ಒಳಗಣ್ಣನ್ನೂ ಉಪಯೋಗಿಸಿ, ಮುಖ್ಯವಾಗಿ ನ್ಯಾಯ ಕೇಳಲು ಶಕ್ತಿಯಿಲ್ಲದವರಿಗೂ ಸಹ ನ್ಯಾಯ ಕೇಳಲು ಧೈರ್ಯ–ಶಕ್ತಿ ಬರುವಂತೆ, ನ್ಯಾಯ ದೊರೆಯುವಂತೆ ವಾತಾವರಣ ಮಾರ್ಪಡಬೇಕು. ಇದರಲ್ಲಿ ಅಡ್ಡಿ–ಅಡಚಣೆಗಳು, ಒತ್ತಡ–ರಾಜಕೀಯಗಳು ಇರುವುದಿಲ್ಲನೆಂದಲ್ಲ. ಈ ಕ್ಷೇತ್ರದಲ್ಲೂ 'ಪ್ರಭಾವಿ'ಗಳೂ, ಬಗೆಬಗೆಯ ಪ್ರಭಾವ ಬಳಸಲು ಬರುವವರೂ ಬೇಕಾದಷ್ಟು ಜನ ಇದ್ದಾರೆ. ಆದರೆ ಹಣದ್ದಾಗಲಿ, ರಾಜಕೀಯದ್ದಾಗಲಿ– ಪ್ರಭಾವಕ್ಕೆ ಮಣಿಯದೆ ವರ್ತಿಸುವುದು ನಿಜವಾಗಿ ಹೆಚ್ಚು ಕ್ಷೇಮಕರವಾದ ಮಾರ್ಗವಾಗುತ್ತದೆ.

ಅದರಲ್ಲೂ ಇಲ್ಲಿ ಸದ್ಯ ಗೋವಿಂದ ಗೌಡರು ಪೋಲೀಸರ ಕೆಲಸದಲ್ಲಿ ಮಧ್ಯ ಪ್ರವೇಶಿಸುವುದಿಲ್ಲವೆನ್ನುತ್ತಾರೆ. ಅಷ್ಟೇ ಅಲ್ಲ, ಒಳ್ಳೆಯ ಕೆಲಸಕ್ಕೆ ಸಾಕಷ್ಟು ಉತ್ತೇಜನವನ್ನೂ ಕೊಡಬಲ್ಲವರು ಅವರು. ಅವರ ಹೆಸರು ಹೇಳಿಕೊಂಡು ಪ್ರಭಾವ ಬಳಸಲು ಬರುವವರಿಗೂ ಸೊಪ್ಪು ಹಾಕಬೇಕಿಲ್ಲ. (ಹಾಗೆ ನೋಡಿದರೆ, ಸಮಾಜ ಘಾತಕ ಶಕ್ತಿಗಳದೇ ಸ್ವರ್ಗವಾಗಿದ್ದ ನ.ರಾ. ಪುರದಲ್ಲಿ ಲಕ್ಷ್ಮಣ್ ಕಟ್ಟುನಿಟ್ಟಾಗಿ ವರ್ತಿಸಿದಾಗ ದಂಡನೆಗೆ ಸಿಕ್ಕಿದ ಹೆಚ್ಚಿನವರೆಲ್ಲ ಕಾಂಗ್ರೆಸಿನ ಮುಖ್ಯ ತಿಮುಖ್ಯರೇ. ಆದರೂ ಬೇಗಾನೆ ರಾಮಯ್ಯ ಅಲ್ಲಿ ಲಕ್ಷ್ಮಣ್ ಕೆಲಸದಲ್ಲಿ ತಲೆ ಹಾಕಲಿಲ್ಲ—ಕಟ್ಟ ಕಡೆಯವರೆಗೂ ಸಹ.)

ಈ ಹಿನ್ನೆಲೆಯಲ್ಲಿ, ಕೊಪ್ಪದ ಹೊಸ ಸರ್ಕಲ್ ಇನ್‌ಸ್ಪೆಕ್ಟರಾಗಿ ಮಂಡಲ್‌ಕರ್‌ರವರು ಜು. 17 ರಂದು ಅಧಿಕಾರ ವಹಿಸಿಕೊಂಡಿದ್ದಾರೆ. ಇವರು ಬೆಂಗಳೂರು ನಗರ ಪೋಲೀಸ್ ಜಾಲದಲ್ಲಿ ಕೆಲಸ ಮಾಡಿದ ಅನುಭವಿಗಳು. ಇಲ್ಲಿನ ಪರಿಸ್ಥಿತಿಯ ಬಗ್ಗೆ 'ಮುಂಜಾವು' ಜೊತೆ ಸ್ಥೂಲವಾಗಿ ವಿಚಾರಿಸಿದ ಅವರು, ಹೆಸರು ಹೇಳಿ ಜ್ಞಾಪಕ ಇಡುವಂಥ ದಕ್ಷ, ಪ್ರಾಮಾಣಿಕ ಸರ್ಕಲ್ ಇನ್‌ಸ್ಪೆಕ್ಟರೊಬ್ಬರನ್ನು ಇಲ್ಲಿನ ಜನ ನಿರೀಕ್ಷಿಸತೊಡಗಿ ಬಹಳ ಕಾಲವಾಗಿದೆಯೆಂದನ್ನು ಕೇಳಿ, ಜನರ ಈ ಆಕಾಂಕ್ಷೆಯನ್ನು ಪೂರೈಸಲು ಶಕ್ತಿ ಮೀರಿ ಶ್ರಮಿಸುವುದಾಗಿ ಜನತೆಗೆ ಭರವಸೆ ನೀಡಿದ್ದಾರೆ.

ಯಾವುದೇ ಹೊಸ ಅಧಿಕಾರಿಯನ್ನಾಗಲಿ ಇಲ್ಲಿನ ಜನ ತುಂಬು ಭರವಸೆ ಮತ್ತು ಆಶಾವಾದಗಳೊಂದಿಗೆ ಸ್ವಾಗತಿಸುತ್ತಾರೆ.

# ಒಬ್ಬ ದಕ್ಷ ಪೋಲೀಸ್ ಅಧಿಕಾರಿಯ ಕರಾಳ ಹತ್ಯೆ

ಮಂಗಳೂರಿನ ಉರ್ವ ಪೋಲೀಸ್ ಠಾಣೆಯ ಸಬ್ ಇನ್ಸ್‌ಪೆಕ್ಟರಾಗಿದ್ದ ಕೆ. ಎನ್. ಹಾಸಟ್ಟಿಯವರನ್ನು ಜುಲೈ 7 ರ ಭಾನುವಾರ ಸಂಜೆ 4 ಗಂಟೆಯ ಹಾಡು ಹಗಲಲ್ಲಿ ಉರ್ವ ಸರ್ಕಲ್ ಸಮೀಪದ ರಸ್ತೆ ಚೌಕವೊಂದರಲ್ಲಿ 4 ಜನ ಕುಖ್ಯಾತ ರೌಡಿಗಳು ಇರಿದು ಕೊಂದರು. ಈ ಸ್ಥಳ ಉರ್ವ ಠಾಣೆಗೆ ಕೂಡ ಹತ್ತಿರದಲ್ಲೇ ಇದೆ.

ಹಾಸಟ್ಟಿ ಒಬ್ಬ ಬಹು ದಕ್ಷ, ಕರ್ತವ್ಯನಿಷ್ಠ ಮತ್ತು ನಿರ್ಭೀತ ಯುವಕ ಪೋಲೀಸ್ ಅಧಿಕಾರಿಯಾಗಿದ್ದರು. ಯಾವುದೇ ಒತ್ತಡಕ್ಕೆ ಮಣಿಯುವವರಾಗಿರಲಿಲ್ಲ. ತಮ್ಮ ಕಾರ್ಯವ್ಯಾಪ್ತಿಯ ಪ್ರದೇಶದಲ್ಲಿ ಗೂಂಡಾಗಳು ಮತ್ತು ಸಮಾಜ ಘಾತಕ ಶಕ್ತಿಗಳಿಗೆ ಸಿಂಹಸ್ವಪ್ನವಾಗಿದ್ದರು. ಸಾರ್ವಜನಿಕರಲ್ಲಿ ಅಪಾರ ಮೆಚ್ಚುಗೆ ಮತ್ತು ಗೌರವಕ್ಕೆ ಪಾತ್ರರಾಗಿದ್ದರು. ಆದರೆ ಕೆಲವು ರಾಜಕೀಯ ಹಿತಾಸಕ್ತಿಗಳು ಅವರ ಮೇಲೆ ತಂದ ಒತ್ತಡಗಳಿಗೆ ಅವರು ಜಗ್ಗದಿದ್ದಾಗ ಅವರ ವರ್ಗಾವಣೆಯ ಯತ್ನ ನಡೆದಿದ್ದವು, ಆದರೆ ಫಲಿಸಿರಲಿಲ್ಲ.

**"ಮಾಮೂಲಿ ಕೆಲಸ"**

ಅಂದು ಮಧ್ಯಾಹ್ನ 3 ಗಂಟೆಯ ಹೊತ್ತಿಗೆ ಮನೆಗೆ ಹೋಗಿ ಊಟ ಮುಗಿಸಿ ಪುನಃ ಠಾಣೆಗೆಂದು ಮೋಟಾರು ಬೈಕಿನಲ್ಲಿ ಬರುತ್ತಿದ್ದಾಗ ಶೇಡಿಗುರಿಯ ಬಳಿ ಈ ರೌಡಿಗಳನ್ನು ಗಮನಿಸಿ ಇವರೇನೋ ಕಾರಸ್ಥಾನದಲ್ಲಿ ತೊಡಗಿದ್ದಾರೆಂದು ಶಂಕಿಸಿದ ಹಾಸಟ್ಟಿ, ಅವರ ಬಳಿ ಹೋಗಿ "ನಿಮ್ಮ ಮಾಮೂಲಿ ಕೆಲಸ ಶುರು ಮಾಡೀರಿ" ಎಂದು ಎಚ್ಚರಿಸಿದರು.

ಇಷ್ಟನ್ನೇ ಕಾಯುತ್ತಿದ್ದಂತೆ ಆ ನಾಲ್ವರೂ ಹಠಾತ್ತನೆ ಹಾಸಟ್ಟಿಯವರ ಮೇಲೆ ಎರಗಿ ಎಡೆಯಲ್ಲಿ ಇರಿದರು. ರಕ್ತದ ಮಡುವಿನಲ್ಲಿ ಹಾಸಟ್ಟಿ ಬಿದ್ದರು.

ಕರ್ತವ್ಯ ನಿರತ ಪೋಲೀಸ್ ಅಧಿಕಾರಿಯ ಮೇಲೆ ಹೀಗೆ ಎರಗುವುದು ಬಹಳ ಅಪರೂಪವಾದ್ದಾದರೂ ಅದಕ್ಕಿಂತ ಆಶ್ಚರ್ಯಕರವಾದುದೆಂದರೆ, ಹಾಸಟ್ಟಿ ಹಾಗೆ ರಕ್ತದ ಮಡುವಿನಲ್ಲಿ 40 ನಿಮಿಷ ಕಾಲ ಬಿದ್ದಿದ್ದರೂ ಸುತ್ತಮುತ್ತಲಿನವರ್ಯಾರೂ ಅವರನ್ನು ಆಸ್ಪತ್ರೆಗೆ ಸಾಗಿಸುವುದಾಗಲೀ ಏನೊಂದೂ ಮಾಡಲಿಲ್ಲವೆಂಬುದು. ಕಟ್ಟ ಕಡೆಗೆ ಯಾರೋ ಉರ್ವ ಠಾಣೆಗೆ ಫೋನ್ ಮಾಡಿ, ಅವರು ಬಂದು ಹಾಸಟ್ಟಿಯವರನ್ನು ಆಸ್ಪತ್ರೆಗೆ ಸಾಗಿಸುವಷ್ಟರಲ್ಲಿ ಅವರು ಸತ್ತಿದ್ದರು.

ತಕ್ಷಣ ಪೋಲೀಸರು ರೌಡಿಗಳ ಪತ್ತೆಗೆ ತೊಡಗಿದರು. ಆದರೆ ಮರುದಿನದೊಳಗಾಗಿ ಕೊಲೆಯ ಪ್ರಮುಖ ಆರೋಪಿ ವಿಠ್ಠಲ ಸಾಲ್ಯಾನ್ ತನ್ನ ಸಂಬಂಧಿಯೊಬ್ಬರ ಮನೆಯಲ್ಲಿ ನೇಣು ಹಾಕಿಕೊಂಡು "ಆತ್ಮಹತ್ಯೆ ಮಾಡಿಕೊಂಡ."

ಇನ್ನೊಬ್ಬ ಆರೋಪಿ ಜಯಂತ ಕಾರ್ಕಳದ ಬಳಿ ನೆಕ್ರೆ ಎಂಬಲ್ಲಿ ಇನ್ನೊಬ್ಬ ಆರೋಪಿ ಮೋಹನ ಕುಮಾರ್‌ನೊಂದಿಗೆ ಅಡಗಿಕೊಂಡಿದ್ದ ಮನೆಯನ್ನು ಸೋಮವಾರ ಪೋಲೀಸರು ಸುತ್ತುಗಟ್ಟಿದಾಗ ಜಯಂತ ತಪ್ಪಿಸಿಕೊಂಡು ಓಡುತ್ತ ಬಾವಿಯಲ್ಲಿ ಹಾರಿ "ಆತ್ಮಹತ್ಯೆ" ಮಾಡಿಕೊಂಡ. ಮೋಹನ್ ಕುಮಾರ್ ಬಂಧಿಯಾದ. 4 ನೇ ಆರೋಪಿ ಮೋಹನ್ ಚೆಟ್ಟಿಯಾರ್‌ನನ್ನೂ ಮಂಗಳವಾರ ಬಂಧಿಸಲಾಯಿತು.

**"ರಾಜಕೀಯ ಇಲ್ಲ" ?**

ಹಾಸಟ್ಟಿಯವರ ಕೊಲೆ ಮತ್ತು ಅನಂತರದ ವಿದ್ಯಮಾನಗಳು ಹಲವು ಪ್ರಶ್ನೆಗಳಿಗೆ ಎಡೆಕೊಟ್ಟಿವೆ. ಮುಖ್ಯವಾದುವೆಂದರೆ, (1) ಕೊಲೆಯಾದ ಒಂದೆರಡು ಗಂಟೆಯೊಳಗಾಗಿ ಡಿ.ಐ.ಜಿ. ರೇವಣಸಿದ್ದಯ್ಯ, "ಈ ಕೊಲೆಗೆ ರಾಜಕೀಯ ಹಿನ್ನೆಲೆಯೇನೂ ಇಲ್ಲ. ಇದು, ಹಾಸಟ್ಟಿಯಿಂದ ತೀವ್ರ ಕ್ರಮಕ್ಕೊಳಗಾಗಿದ್ದ ಕೆಲವು ರೌಡಿಗಳು ಸೇಡು ತೀರಿಸಿಕೊಂಡದ್ದು ಮಾತ್ರ" ಎಂದು ಘೋಷಿಸಲು ಕಾರಣವೇನು? (2) ಆರೋಪಿಗಳು ಸೆರೆ ಸಿಕ್ಕುವ ಬದಲು "ಆತ್ಮಹತ್ಯೆ" ಮಾಡಿಕೊಂಡಿದ್ದು ಪೂರ್ವ ನಿಯೋಜಿತವೆ? ಇತ್ಯಾದಿ.

ಏಕೆಂದರೆ, ರೌಡಿಗಳು, ಗೂಂಡಾಗಳು ಯಾವಾಗಲೂ ರಾಜಕಾರಣಿಗಳ ಮತ್ತು ಸಮಾಜ ಘಾತಕ ಶಕ್ತಿಗಳ ಆಶ್ರಯವಿಲ್ಲದೆ ತಾವೇ ತಾವಾಗಿ ಬಾಳಲಾರರು ಎಂಬುದು ಸರ್ವ ವಿದಿತ. ಹಾಗಾದರೆ ಡಿಐಜಿಯವರು ತರಾತುರಿಯಲ್ಲಿ ಹೆಗಲು ಒರೆಸಿಕೊಂಡಿದ್ದೇಕೆ?

ಎರಡನೆಯದಾಗಿ, ಕೊಲೆಗೆ ಕೆಲವೇ ದಿನಗಳ ಹಿಂದೆ ವಿಠ್ಠಲ ಕೋಟ್ಯಾನ್ ತನ್ನ ಗರ್ಭಿಣಿ ಪತ್ನಿಯೊಂದಿಗೆ, "ನಮ್ಮ ಮಗುವಿನ ಮುಖ ನೋಡಲು ನಾನು ಬದುಕಿರಲಿಕ್ಕಿಲ್ಲ" ಎಂದು ಹೇಳಿದ್ದುದಾಗಿ ನೆರೆಯವರು ಹೇಳಿದ್ದಾರೆ. ಅಂದರೆ ಕೊಲೆ, ಅನಂತರ ಆತ್ಮಹತ್ಯೆ— ಈ ಎಲ್ಲದರ ಯೋಜನೆ ಅವನಿಗೆ ಮೊದಲೇ ಗೊತ್ತಿತ್ತಲ್ಲವೆ ? ಆ ಯೋಜನೆಯ ಹಿಂದೆ ಯಾರೆಲ್ಲ ಇದ್ದಾರೆ?

**ಪೋಲೀಸರಿಗೆ ಸರ್ಟಿಫಿಕೇಟ್**

ಹಾಸಟ್ಟಿ ಇರಿತಕ್ಕೊಳಗಾದ ತಕ್ಷಣ ಆಸ್ಪತ್ರೆಗೆ ಸಾಗಿಸಲ್ಪಟ್ಟಿದ್ದರೆ ಅವರು ಬದುಕುವ ಸಾಧ್ಯತೆ ಇತ್ತೆಂದು ಸುತ್ತ ಮುತ್ತಲವರು ಹೇಳಿದ್ದಾರೆ. ಆದರೆ ಅವರು 40 ನಿಮಿಷ ರಕ್ತ ಸೋರುತ್ತ ರಸ್ತೆಯಲ್ಲಿ ಬಿದ್ದಿದ್ದರು. ಅವರ ಸಹಾಯಕ್ಕೆ ಬಂದರೆ ಗೂಂಡಾಗಳು ಪ್ರತೀಕಾರ ಮಾಡಬಹುದೆಂಬ ಹೆದರಿಕೆ, ಜೊತೆಗೆ "ಪೋಲೀಸರ ನಡವಳಿಕೆ ಗೊತ್ತಲ್ಲ, ಆದ್ದರಿಂದ—" ಯಾರೂ ಅತ್ತ ತಲೆ ಹಾಕಲಿಲ್ಲ. ಆದರೆ, "ಹಾಸಟ್ಟಿಯವರಂಥ ಇನ್ನೂ ಕೆಲವರಾದರೂ ಸಬ್ ಇನ್ಸ್‌ಪೆಕ್ಟರುಗಳು ಇದ್ದಿದ್ದರೆ ಈ ನಗರದಲ್ಲಿ ಬದುಕು ಸ್ವಲ್ಪ ಸಹನೀಯವಾಗಿರುತ್ತಿತ್ತು" ಎನ್ನುತ್ತಾರೆ ಜನ.

**ಡಿಐಜಿ ಮಾಡಬೇಕಾದ್ದು**

"ದುಷ್ಟರು, ಸಮಾಜ ಘಾತುಕರು ಮತ್ತು ಇಂಥ ಕೆಟ್ಟವರಿಗಾಗಿ, ಅವರಿಂದಲೇ ನಡೆಯುವ, ಅವರದೇ ಆಗಿರುವ" ಇಂದಿನ ನಮ್ಮ ಸಮಾಜದಲ್ಲಿ ಅವಗುಣಗಳಾಗಿ ಕಂಡುಬರುವಂಥ ದಕ್ಷತೆ, ನ್ಯಾಯಪರತೆ, ಪ್ರಾಮಾಣಿಕತೆಗಳಂಥ ಗುಣಗಳಿಗಾಗಿ ಹಾಸಟ್ಟಿ ಅತಿ ದುಬಾರಿ ಬೆಲೆ ತೆತ್ತಿದ್ದಾರೆ. ತೀರ ಬಡ ಕುಟುಂಬದಿಂದ ಬಂದಿದ್ದ ಅವರು 24 ವರ್ಷದ ಪತ್ನಿ ಮತ್ತು ಒಂದು ಗಂಡು, ಒಂದು ಹೆಣ್ಣು ಮಕ್ಕಳನ್ನು ಅಗಲಿದ್ದಾರೆ. ಈ ಕುಟುಂಬಕ್ಕಾಗಿ ಅವರ ಮೇಲಧಿಕಾರಿಗಳು ಉತ್ಸಾಹದಿಂದ, ಅದ್ದೂರಿಯಿಂದ ನಿಧಿ ಸಂಗ್ರಹಿಸುತ್ತಿದ್ದಾರೆ. ಇದೊಂದು ಅಗತ್ಯವಾದ ಒಳ್ಳೆಯ ಕೆಲಸವಿರಬಹುದು. ಆದರೆ ಮೇಲಧಿಕಾರಿಗಳೆನಿಸಿಕೊಂಡವರು ಮಾಡಬೇಕಾಗಿರುವ ಇದಕ್ಕಿಂತ ದೊಡ್ಡ ಕೆಲಸವೆಂದರೆ, **ಎಲ್ಲಾ ರೀತಿಯಿಂದಲೂ ಪೂರ್ವ ನಿಯೋಜಿತವೆಂದು ಮೇಲುನೋಟಕ್ಕೇ ಕಾಣುವ ಈ ಕೊಲೆಯ ಹಿಂದೆ ಯಾವುದು 'ಇಲ್ಲ' ಎಂದು ಸಾಧಿಸಲು**

(ಮೂರನೇ ಪುಟಕ್ಕೆ)

## ಮಳೆ ಬರಿಸಲು ಈಗ ಇನ್ನೊಬ್ಬ ಬಾಬಾ!

ಬೆಂಗಳೂರು ಜಿಲ್ಲೆ ವಿಜಯಪುರದಲ್ಲಿ ಸ್ವಂತ ತೋಟವೊಂದನ್ನು ಹೊಂದಿರುವ ಬಾಬಾ ಬಕ್ಷು ಸಾಹೇಬ್ ಎಂಬ ಇನ್ನೊಬ್ಬ 'ದೇವತಾ ಪುರುಷ' ಈಗ ಮಳೆ ಬರಿಸುವ ಕಾಯಕಕ್ಕಿಳಿದಿದ್ದಾರೆ.

ಶಿವಬಾಲಯೋಗಿಯನ್ನು ಟೀಕಿಸಿ, ಆತನಿಂದ ಮಳೆ ಬರಿಸಲು ಸಾಧ್ಯವಿಲ್ಲವೆಂದು ಹಿಂದೆಯೇ ತಾನು ತಿಳಿಸಿದ್ದುದಾಗಿ ಹೇಳಿರುವ ಈ ಬಾಬಾ, ತಿಪ್ಪಗೊಂಡನ ಹಳ್ಳಿ ಜಲಾಶಯಕ್ಕೆ ಮಾತ್ರವಲ್ಲ, ಇಡೀ ರಾಜ್ಯದ ಎಲ್ಲಾ ಅನಾವೃಷ್ಟಿ ಪೀಡಿತ ಪ್ರದೇಶಗಳಿಗೂ ಮಳೆಯಾಗುವಂತೆ ಪ್ರಾರ್ಥನೆ ಮಾಡುವುದಾಗಿ ಹೇಳಿಕೊಂಡಿದ್ದಾರೆ.

ಈತ ಗುಂಡೂರಾವ್, ಎಫ್.ಎಂ ಖಾನ್‌ಗಳಿಗೆ ಖಾಯಂ ಜೋತಿಷಿಯಂತೆ.

## ಮೀಟಿಂಗುಗಳ ಮುಗಿಯದ ಸಾಲು

ಈಚೆಗೆ ಸರ್ಕಾರಿ ಇಲಾಖೆಗಳಲ್ಲಿ ಹೆಚ್ಚಿರುವ ಒಂದು 'ಚಟುವಟಿಕೆ' ಎಂದರೆ ಅಸಂಖ್ಯವಾಗಿ ನಡೆಯುತ್ತಿರುವ ಉನ್ನತಮಟ್ಟದ ಮೀಟಿಂಗುಗಳು. ಜಿಲ್ಲೆ, ವಿಭಾಗ ಮತ್ತು ರಾಜ್ಯ ಮಟ್ಟದಲ್ಲಿ ತಿಂಗಳಿಗೆ ಐದು–ಆರು ಮೀಟಿಂಗುಗಳು ನಡೆಯುತ್ತವೆ. ಪ್ರತಿಯೊಂದಕ್ಕೂ ಅದೇ ಅದೇ ಅಂಕಿ ಸಂಖ್ಯೆಗಳನ್ನು ತಿರುಗ-ಮುರುಗ ಮಾಡಿ ಜೋಡಿಸಿಕೊಂಡು ಜಿಲ್ಲೆಯ ಎಲ್ಲಾ ತಾಲ್ಲೂಕುಗಳಿಂದಲೂ ಎಲ್ಲಾ ಇಲಾಖೆಗಳ ಅಧಿಕಾರಿಗಳೂ ಹೋಗಬೇಕು. ಇವು ಜಾಯಿಂಟ್ ಮೀಟಿಂಗುಗಳು. ಇನ್ನು ಆಯಾ ಇಲಾಖೆಯ ಉನ್ನತ ಸಭೆಗಳು ಬೇರೆ. ಒಟ್ಟಿಗೆ ಒಂದು ತಿಂಗಳಲ್ಲಿ ಸುಮಾರು 12ರಿಂದ 15 ದಿನ ಅಧಿಕಾರಿಗಳ ಈ ಸಭೆಗಳ ಓಡಾಟಕ್ಕೇ ಖರ್ಚಾಗುತ್ತಿದೆಯೆನ್ನಲಾಗಿದೆ. ಇದರಿಂದ ಕಚೇರಿಗಳಲ್ಲಿ ಕೆಲಸವೇ ಮುಂದಕ್ಕೆ ಹೋಗದಂತಾಗಿ ಎಂದು ಸಿಬ್ಬಂದಿ ಹೇಳುತ್ತಾರೆ.

ಹೀಗೆ ನಾಲ್ಕಾರು ತರದ ಜಾಯಿಂಟ್ ಮೀಟಿಂಗುಗಳಿಗೆ ಬದಲಾಗಿ ಜಿಲ್ಲಾ ಅಭಿವೃದ್ಧಿ ಸಮಿತಿಯ ಸಭೆ ಒಂದನ್ನೇ ಸಮರ್ಪಕವಾಗಿ ನಡೆಸಿದರೆ ಸಾಕು. ಅಲ್ಲಿ ಎಲ್ಲಾ ಇಲಾಖೆಗಳ ಎಲ್ಲಾ ಅಂಕಿ-ಸಂಖ್ಯೆಗಳು ಸಿಗುತ್ತವೆ. ಅವನ್ನೇ ಬೇರೆ ಸಭೆಗಳಿಗೂ ಕೊಡುವುದು. ಆದ್ದರಿಂದ ಈ ವ್ಯರ್ಥ ಶ್ರಮ ಸಮಯ ಮತ್ತು ಹಣದ ಪೋಲು ಇವನ್ನೆ ತಪ್ಪಿಸಬಹುದು ಎನ್ನುತ್ತಾರೆ ಕಚೇರಿಗಳ ಹಿರಿಯ ನೌಕರರು.

ಇಂಥ ಸಭೆಗಳಿಗೆ ವಿವಿಧ ಇಲಾಖೆಗಳ ಅಧಿಕಾರಿಗಳು ಮಾತ್ರವಲ್ಲ, ಬಹಳ ಸ ವಿವಿಧ ಬ್ಯಾಂಕುಗಳ ಮುಖ್ಯಸ್ಥರೂ ಬೇಕಾಗುತ್ತದೆ. ಹೀಗಾಗಿ ಅಲ್ಲೂ ಕೆಲಸ ಅಡಚಣೆ. ಜೊತೆಗೆ ಆಯಾ ಕ್ಷೇತ್ರದ ಸಕರುಗಳು–ಮಂತ್ರಿಗಳು ಪ್ರವಾಸ ಗೊಂಡಾಗ ಅವರ ಜೊತೆಗೆ ಬೇರೆ ಅಧಿ ಗಳು ಇರಬೇಕಾಗುತ್ತದೆ. (ಸರಿಯಾದ ಯಲ್ಲಿ ಮಿತವಾಗಿ ನಿರ್ವಹಿಸಿದರೆ ಇದ ತಪ್ಪಲ್ಲ.)

ಅನಗತ್ಯವಾದ ಮೀಟಿಂಗುಗಳನ್ನು ಮಾಡಿ ತಿಂಗಳಲ್ಲಿ ಒಂದೋ ಎರಡೋ ಗತ್ಯ ಸಭೆಗಳು ಮಾತ್ರ ನಡೆಯುವಂತೆ ಕಾರ ಬದಲಾವಣೆ ಮಾಡಬೇಕಾಗಿದೆ.

## ಮೀಸಲಾತಿಯಿಂದ ಗುಣಮಟ್ಟ ಕುಸಿಯದು

ಜಾತಿ ಆಧಾರಿತ ಮೀಸಲಾತಿಯಿಂದಾಗಿ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ತಮ್ಮ ಹಕ್ಕುಗಳನ್ನು ಉಪಯೋಗಿಸಿಕೊಳ್ಳಲು ಒಂದು ಅವಕಾಶವನ್ನು ಮಾತ್ರ ಒದಗಿಸಿದಂತಾಗುವುದರಿಂದ, ಇದರಿಂದ ವಿದ್ಯಾಭ್ಯಾಸದ ಗುಣಮಟ್ಟವೇನೂ ಕುಸಿಯುವುದಿಲ್ಲ ಎಂಬುದಾಗಿ ಅಧ್ಯಯನವೊಂದರಿಂದ ವ್ಯಕ್ತವಾಗಿದೆ.

ಆಂಧ್ರಪ್ರದೇಶದ ವಾರಂಗಲ್ಲಿನ ಕಾಕತೀಯ ವಿಶ್ವ ವಿದ್ಯಾನಿಲಯದ ಡಾ|| ಪರಮಾಜಿ ಎಂಬವರು 'ಜಾತಿ, ಮೀಸಲಾತಿ ಮತ್ತು ಕಾರ್ಯಕ್ಷಮತೆ' ಎಂಬ ವಿಷಯವಾಗಿ ನಡೆಸಿದ ಅಧ್ಯಯನದಲ್ಲಿ ಈ ಅಂಶ ದೃಢಪಟ್ಟಿದೆ. ಈ ಅಧ್ಯಯನದ ಸಂದರ್ಭದಲ್ಲಿ ಅವರು 8000 ಜನ ವಿದ್ಯಾರ್ಥಿಗಳನ್ನೂ ಅಧ್ಯಾಪಕರನ್ನೂ ಸಂದರ್ಶಿಸಿದ್ದಾರೆ.

ಮೀಸಲಾತಿ ಗುಂಪುಗಳ ವಿದ್ಯಾರ್ಥಿಗಳಿಗೂ ಮುಂದುವರಿದ ಜಾತಿಗಳ ವಿದ್ಯಾರ್ಥಿಗಳಿಗೂ ಶಾಲಾ ಪ್ರವೇಶದ ವೇಳೆ ಇರುವ ಶಿಕ್ಷಣ ಮಟ್ಟದ ಅಂತರವು ಮುಂದಿನ ವರ್ಷಗಳಲ್ಲಿ ಕಡಿಮೆಯಾಗುತ್ತ ಸಾಗುತ್ತದೆ. ಅಷ್ಟೇ ಅಲ್ಲ, ಎಷ್ಟೋ ವೇಳೆ ಅಂತಿಮ ಪರೀಕ್ಷೆಗಳಲ್ಲಿ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳು ಮುಂದುವರಿದ ವಿದ್ಯಾರ್ಥಿಗಳನ್ನೂ ಮೀರಿಸಿರುವ ಸಂದರ್ಭಗಳೂ ಸಿಗುತ್ತವೆ ಎಂಬುದು ಈ ಅಧ್ಯಯನದಿಂದ ಕಂಡು ಬಂದಿದೆ.

ಸೂಕ್ತವಾದ ಅವಕಾಶಗಳನ್ನು ಕೊಟ್ಟಲ್ಲಿ ಈ ವರ್ಗಗಳಿಗೆ ಹಿಂದಿನಿಂದ (ವಿದ್ಯೆಯಂಥ) ಸಾಂಸ್ಕೃತಿಕ ಬೆಳವಣಿಗೆಯ ಅವಕಾಶಗಳು ಲಭ್ಯವಾಗದ್ದರಿಂದ ಉಂಟಾಗಿರುವ ಕೊರತೆ ಮತ್ತು ದುಷ್ಪರಿಣಾಮಗಳನ್ನು ಸಹ ಹೋಗಲಾಡಿಸಿ ಅತ್ಯುತ್ತಮ ಪ್ರತಿಭೆಯನ್ನು ಹೊರ ಕೂಡಿಸಲು ಸಾಧ್ಯ ಎಂಬುದೂ ಸಹ ಡಾ|| ಪರ್ಮಾಜಿಯವರ ಅಧ್ಯಯನದಿಂದ ಸಾಧಿಸಲ್ಪಟ್ಟಿದೆ.

(ಸೌಜನ್ಯ: ಇಂಡಿಯನ್ ಎಕ್ಸ್‌ಪ್ರೆಸ್.)